ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಮಂಗಳವಾರ, ದಿನಾಂಕ: 29ನೇ ಸೆಪ್ಟಂಬರ್, 2020

ಮರಳು ಲಭ್ಯತೆಯ ಕೊರತೆ ಮತ್ತು ಉಂಟಾಗಿರುವ ಸಮಸ್ಯೆ ಬಗ್ಗೆ

ಶ್ರೀ ಕೆ. ಗೋವಿಂದರಾಜ್ (ವಿಧಾನಸಭೆಯಿಂದ ಚುನಾಯಿತರಾದವರು):-

909 (1250) ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದ ಯಾವ ಯಾವ ಭಾಗಗಳಲ್ಲಿ ಕಟ್ಟಡ ನಿರ್ಮಾಣಕ್ಕೆ ಬಳಸುವ ಮರಳಿನ ಲಭ್ಯತೆ ಇದೆ; (ಪ್ರದೇಶವಾರು, ದೊರಕುವ ಮರಳಿನ ಪ್ರಮಾಣ, ಲಭ್ಯ ಮರಳಿನ ಅವಶ್ಯಕತೆ ಮತ್ತು ಸಾಗಾಟ ಪ್ರದೇಶಗಳ ಕುರಿತು ಪ್ರತ್ಯೇಕ ಮಾಹಿತಿ ಒದಗಿಸುವುದು)

(ಆ) ರಾಜ್ಯದಲ್ಲಿ ಪ್ರಸ್ತುತ ಮರಳುಗಣಿಗಾರಿಕೆಗೆ ನಿಷೇಧ ವಿಧಿಸಲಾಗಿದೆಯೇ; ಹಾಗಿದ್ದಲ್ಲಿ, ಕಟ್ಟಡ ನಿರ್ಮಾಣಕ್ಕಾಗಿ ಅವಶ್ಯ ಮರಳನ್ನು ಒದಗಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು ; (ಸಂಪೂರ್ಣ ಮಾಹಿತಿ ಒದಗಿಸುವುದು)

(ಇ) ಮರಳನ್ನು ಆಮದು ಮಾಡಿಕೊಂಡಿರುವುದು ನಿಜವೇ; ಹಾಗಿದ್ದಲ್ಲಿ, ಆಮದು ಮಾಡಿಕೊಂಡ ಮರಳಿನ ಉಪಯೋಗ, ವೆಚ್ಚ, ಸಂಸ್ಥೆ ಕುರಿತಾದ ಸಂಪೂರ್ಣ ಮಾಹಿತಿ ಒದಗಿಸುವುದು ?